



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 33

| ಸಂಪುಟ: ೦೪ ಸಂಚಿಕೆ: ೭ | ಅಕ್ಟೋಬರ್ ೨೦೧೭ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 04 Issue 7 | October 2017 | Pages - 8 | A. Sub. - Rs. 20/- | Editor : Sri. B.R. Ravindranath |




**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–
ಐದು ವರ್ಷಗಳ ಚಂದಾ
ರೂ. ೧೦೦/–

ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org

## ಶ್ರೀಮತಿ ಸಾವಿತ್ರಮ್ಮ–ಪ್ರೊ॥ ಎಂ.ವಿ.ಸೀತಾರಾಮಯ್ಯ ಸಾಹಿತ್ಯ ಪುರಸ್ಕಾರ

ಪ್ರದಾನ ಮತ್ತು ಅಧ್ಯಕ್ಷತೆ :
ಪ್ರೊ॥ ಎಂ.ಎಚ್. ಕೃಷ್ಣಯ್ಯ
ಪುರಸ್ಕಾರ ಪಡೆದವರು :
ಪ್ರೊ॥ ಸಿ. ಮಹಾದೇವಪ್ಪ
(ಪ್ರಖ್ಯಾತ ವಿದ್ವಾಂಸರು)



ಬಿ.ಎಂ.ಶ್ರೀ ಪ್ರತಿಷ್ಠಾನದ ಸಂಸ್ಥಾಪಕರು ಮತ್ತು ಹೆಸರಾಂತ ಸಂಶೋಧಕರು, ಕವಿಗಳೂ ಮತ್ತು ವಿಮರ್ಶಕರು ಆದ ದಿವಂಗತ ಪ್ರೊ॥ ಎಂ.ವಿ.ಸೀತಾರಾಮಯ್ಯ ಮತ್ತು ಅವರ ಸಹಧರ್ಮಿಣಿ ಹೆಸರಿನಲ್ಲಿ ಅವರ ನಾಲ್ವರು ಪುತ್ರರಿಂದ ಸ್ಥಾಪಿಸಿರುವ ದತ್ತಿಯಲ್ಲಿ, ಈ ವರ್ಷ ನಾಲ್ಕನೇ ಸಾಹಿತ್ಯ ಪುರಸ್ಕಾರ ನೀಡುತ್ತಿರುವ ಸಂಧರ್ಭದಲ್ಲಿ, ದಿನಾಂಕ ೯ನೇ ಸೆಪ್ಟೆಂಬರ್ ೨೦೧೭ರಂದು ಬಹಳ ಸಂಭ್ರಮ ಮತ್ತು ಸಡಗರದ ವಾತಾವರಣ.ಕಾರಣ ಈ ಪುರಸ್ಕಾರವನ್ನು ಸ್ವೀಕರಿಸುತ್ತಿರುವವರು ೯೬ ವರ್ಷದ ವಯೋವೃದ್ಧರು.ಆದರೂ ೯೬ರ ಹರಯದಲ್ಲೂ ಸಂಶೋಧನ ಸಂಪಾದನೆ–ಅಧ್ಯಯನ, ಗಣಕಯಂತ್ರದಲ್ಲಿ ಕಾರ್ಯನಿರ್ವಹಣೆ, ಹೀಗೆ ತಮ್ಮನ್ನು ಸದಾ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ವ್ಯಕ್ತಿ ಪ್ರೊ॥ ಸಿ.ಮಹದೇವಪ್ಪನವರು.ತಮ್ಮ ನಿವಾಸದಲ್ಲಿಯೇ ಒಂದು "ಸಂಶೋಧನ ಕೋಟಿ" ಎಂಬ ಅಂಕಣ ಸಂಶೋಧನಾ ಚಟುವಟಿಕೆಗಳಿಗಾಗಿ ಮೀಸಲಿಟ್ಟಿದ್ದಾರೆ.

ಮೂರು ವಿದ್ವಾಂಸರ ಆಯ್ಕೆ ಸಮಿತಿ–ಪ್ರೊ॥ ಶಶಿಕಲಾ, ಡಾ॥ ಆರ್.ಲಕ್ಷ್ಮೀನಾರಾಯಣ ಮತ್ತು ಡಾ॥ ಅನ್ನದಾನೇಶ್–ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಗಣನೀಯ ಕೊಡುಗೆಯನ್ನು ನೀಡಿರುವ ಪ್ರೊ॥ ಸಿ.ಮಹಾದೇವಪ್ಪ ಅವರನ್ನು ಆಯ್ಕೆ ಮಾಡಿ ಪುರಸ್ಕಾರದ ಹಿರಿಮೆಯನ್ನು ಹೆಚ್ಚಿಸಿದ್ದಾರೆ.

ಪುಟ ೫ರಲ್ಲಿ

## ಹಳಗನ್ನಡ ಶಿಬಿರ ಸಮಾರೋಪ ಸಮಾರಂಭ

ಬಿ.ಎಂ.ಶ್ರೀ. ಪ್ರತಿಷ್ಠಾನದ ಎಂ.ವಿ.ಸೀ ಸಭಾಂಗಣದಲ್ಲಿ ಸೆಪ್ಟಂಬರ್ ೧೦ರಂದು, ವಿವಿಧ ವಯೋಮಾನದ ವಿದ್ಯಾರ್ಥಿಗಳಿಂದ ಒಂದು ಸಡಗರದ ವಾತಾವರಣ ನಿರ್ಮಾಣವಾಗಿತ್ತು. ಕಾರಣ, ಹಳಗನ್ನಡ ಕಾವ್ಯಾಭ್ಯಾಸ ಶಿಬಿರದ ಸಮಾರೋಪ ಸಮಾರಂಭ, ಬಹುಮಾನಗಳ ಮತ್ತು ಪ್ರಮಾಣ ಪತ್ರಗಳ ವಿತರಣೆ ಮತ್ತು ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರಿಗಳ ಸಮಾರೋಪ ಭಾಷಣ ಆಲಿಸಲು ನೆರೆದ ವಿದ್ಯಾರ್ಥಿಗಳ ಮತ್ತು ಅಧ್ಯಾಪಕರುಗಳ ಹಾಜರಾತಿಯಿಂದ.



ಕಾರ್ಯಕ್ರಮದ ವಿಶೇಷಗಳು :

೧) ಮೊದಲ ಬಾರಿಗೆ ಹಳಗನ್ನಡ ಕಾವ್ಯಭ್ಯಾಸ ತರಗತಿ

೫ನೇ ಪುಟಕ್ಕೆ

## ಸಂಪಾದಕೀಯ

ಕನ್ನಡ ಅಭಿವೃದ್ಧಿ ಪ್ರಾಧಿಕಾರವು ರಾಷ್ಟ್ರ ಮಟ್ಟದ ಪರೀಕ್ಷೆಗಳನ್ನು ಬರೆಯಲು ಕನ್ನಡ ಮಾಧ್ಯಮದಲ್ಲಿಯೂ ಅವಕಾಶ ಮಾಡಿಕೊಡಬೇಕು ಎಂದು ಒತ್ತಡ ಹೇರುತ್ತಿರುವುದು ಸ್ವಾಗತಾರ್ಹ. ಎಲ್ಲಾ ರಾಜಕೀಯ ಪಕ್ಷಗಳ ರಾಜ್ಯ ಮಟ್ಟದ ನಾಯಕರೂ ಇದಕ್ಕೆ ಬೆಂಬಲವಾಗಿ ನಿಂತಿರುವುದು ಸಂತಸದ ಸಂಗತಿಯಾಗಿರುತ್ತದೆ.ಭಾರತದ ಅತ್ಯುನ್ನತ ಮಟ್ಟದ ಹಾಗೂ ಬಹಳ ಜನಪ್ರಿಯವಾದ ನಾಗರೀಕ ಸೇವಾ ಪರೀಕ್ಷೆಗಳನ್ನೂ ಕನ್ನಡದ ಮಾಧ್ಯಮದಲ್ಲಿ ಬರೆಯಲು ಅವಕಾಶವಿರುವಾಗ ಇತರ ಪರೀಕ್ಷೆಗಳನ್ನೂ ಕನ್ನಡ ಮಾಧ್ಯಮದಲ್ಲಿ ಬರೆಯಲು ಅವಕಾಶ ನೀಡಲೇಬೇಕಾಗಿರುತ್ತದೆ. ಜೊತೆಗೆ ಹಿಂದಿ ಭಾಷೆಯ ಮಾಧ್ಯಮದಲ್ಲಿ ಈ ಪರೀಕ್ಷೆಗಳನ್ನು ಬರೆಯಲು ಅವಕಾಶವಿರುವಾಗ ಕನ್ನಡ ಮಾಧ್ಯಮ ಹಾಗೂ ಇತರ ಪ್ರಾದೇಶಿಕ ಭಾಷೆಗಳ ಮಾಧ್ಯಮಗಳಲ್ಲಿಯೂ ಅವಕಾಶಗಳನ್ನು ನೀಡಬೇಕಾಗುವುದು ಅಗತ್ಯವಾಗುತ್ತದೆ.

ಈ ನಿಟ್ಟಿನಲ್ಲಿ ಹಲವಾರು ಪೂರಕ ಬೆಳವಣಿಗೆಗಳು ಅಪೇಕ್ಷಣೀಯವಾಗಿರುತ್ತವೆ. ಮೊದಲಿಗೆ ನಾಗರೀಕ ಸೇವಾ ಪರೀಕ್ಷೆಗಳನ್ನೂ ಒಳಗೊಂಡಂತೆ ಬಹುತೇಕ ರಾಷ್ಟ್ರ ಮಟ್ಟದ ಪರೀಕ್ಷೆಗಳ ವಿಷಯವಸ್ತುಗಳ ಪಠ್ಯಗಳು ಕನ್ನಡದಲ್ಲಿ ಲಭ್ಯವಾಗುವಂತೆ ವ್ಯವಸ್ಥೆಗಳನ್ನು ಸ್ಥಾಪಿಸಬೇಕಾಗಿದೆ.ನಂತರದಲ್ಲಿ ಇಂತಹ ಪರೀಕ್ಷೆಗಳಿಗೆ ಉತ್ತಮ ಸಿದ್ದತೆಗಳನ್ನು ಮಾಡಿಕೊಡುವಂತಹ ತರಬೇತಿಗಳನ್ನು ನೀಡುವಂತಹ ಸಂಸ್ಥೆಗಳನ್ನು ಪ್ರಾರಂಭಿಸಬೇಕಾಗುತ್ತದೆ. ಅಥವಾ ಪ್ರೋತ್ಸಾಹಿಸಬೇಕಾಗುತ್ತದೆ. ಜೊತೆಗೆ ರಾಜ್ಯ ಮಟ್ಟದಲ್ಲಿ ಸಿದ್ಧತಾ ಪರೀಕ್ಷೆಗಳನ್ನೂ ನಿಯಮಿತವಾಗಿ ನಡೆಸುತ್ತಿದ್ದಲ್ಲಿ ಅಭ್ಯರ್ಥಿಗಳ ಸಿದ್ದತೆಗಳನ್ನು ಪರಿಶೀಲಿಸುವ ಅವಕಾಶಗಳು ದೊರೆಯುತ್ತವೆ. ಸಮಯಾಭಾವ ಹಾಗೂ ಸಂಪನ್ಮೂಲಗಳ ಕೊರತೆಗಳ ಕಾರಣದಿಂದ ರಾಜ್ಯಾದ್ಯಂತ ಅಭ್ಯರ್ಥಿಗಳಿಗೆ ಸಮಾನ ಮಟ್ಟದ ಸಹಾಯ ಹಾಗೂ ಬೆಂಬಲಗಳನ್ನು ದೊರಕಿಸಲು ಯಾವುದೇ ಸಂಸ್ಥೆಗೆ ಸಾಧ್ಯವಾಗುತ್ತಿಲ್ಲ. ದೊಡ್ಡ ಪಟ್ಟಣಗಳಲ್ಲಿ ವಾಸ ಮಾಡುತ್ತಿರುವವರಿಗೆ ಮಾತ್ರ ರಾಷ್ಟ್ರ ಮಟ್ಟದ ಪರೀಕ್ಷೆಗಳಿಗೆ ಸೂಕ್ತ ಮಟ್ಟದ ತಯಾರಿಗಳನ್ನು ಮಾಡಿಕೊಳ್ಳಲು ಅವಕಾಶಗಳು, ಪಠ್ಯಗಳು ಹಾಗೂ ಸಂಪನ್ಮೂಲ ವ್ಯಕ್ತಿಗಳ ಸೇವೆಗಳು ದೊರಕುತ್ತಿವೆ. ಗ್ರಾಮೀಣ ಭಾಗದಲ್ಲಿನ ಅಭ್ಯರ್ಥಿಗಳಿಗೂ ಈ ಸೌಲಭ್ಯಗಳನ್ನು ಕಲ್ಪಿಸಿಕೊಡಲು ದಿನಪತ್ರಿಕೆಗಳು ಹಾಗೂ ಟಿವಿ ಚಾನೆಲ್ ಗಳು ಸಕ್ರಿಯವಾಗಿ ಬೆಂಬಲ ನೀಡಿದಲ್ಲಿ ಬಹಳಷ್ಟು ಸಹಾಯವಾಗುತ್ತದೆ.ಜೊತೆಗೆ ಈ ನಿಟ್ಟಿನಲ್ಲಿ ತಂತ್ರಜ್ಞಾನದ ಸಹಾಯವನ್ನೂ ಪಡೆಯಬಹುದಾಗಿರುತ್ತದೆ.

ಈಗ ಲಭ್ಯವಾಗುತ್ತಿರುವ ತರಬೇತಿ ಪರಿಕರಗಳು ಬಹುತೇಕವಾಗಿ ಮುದ್ರಿತರೂಪದಲ್ಲಿರುತ್ತವೆ ಮತ್ತು ಸ್ವಲ್ಪ ಮಟ್ಟಿಗೆ ದೃಶ್ಯ ಮಾಧ್ಯಮದಲ್ಲಿ ದೊರಕುತ್ತಿವೆ. ಆದರೆ, ಕೇವಲ ಶ್ರವಣ ಮಾಧ್ಯಮದಲ್ಲಿ ತರಬೇತಿ ಪರಿಕರಗಳು ಲಭ್ಯವಿರುವುದಿಲ್ಲ. ಇಂದಿನ ದಿನಗಳಲ್ಲಿ, ಬಹಳಷ್ಟು ಸಮಯವನ್ನು ಅಗತ್ಯ ಪ್ರಯಾಣಕ್ಕಾಗಿ ಮೀಸಲಿಡುವ ಅನಿವಾರ್ಯತೆ ಇರುವಾಗ ಶ್ರವಣ ಮಾಧ್ಯಮದ ಪರಿಕರಗಳು ಬಹು ಉಪಯುಕ್ತವಾಗಿರುತ್ತವೆ. ಶ್ರವಣ ಮಾಧ್ಯಮ ಪರಿಕರಗಳಿಂದ ಹಲವಾರು ಇತರ ಉಪಯೋಗಗಳೂ ಇರುತ್ತವೆ. ಈ ನಿಟ್ಟಿನಲ್ಲಿ ನಾವುಗಳು ಶ್ರಮಿಸಲು ಅವಕಾಶಗಳಿರುತ್ತವೆ.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣ ರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

**ಬಿ.ಆರ್ ರವೀಂದ್ರನಾಥ್**
ಸಂಪಾದಕರು.......

### ಅಕ್ಟೋಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಟಿ.ಎಸ್. ವೆಂಕಣ್ಣಯ್ಯ | ೧-೧೦-೧೮೫೫ |
| ಬಸರಾಜ ಕಟ್ಟಿಮನಿ | ೫-೧೦-೧೯೧೯ |
| ಎಲ್. ಬಸವರಾಜು | ೭-೧೦-೧೯೧೯ |
| ಶಿವರಾಮ ಕಾರಂತ | ೧೦-೧೦-೧೯೦೨ |
| ಕೆರೂರ ವಾಸುದೇವಚಾರ್ಯ | ೧೫-೧೦-೧೮೬೬ |
| ಡಿಎಲ್ ನರಸಿಂಹಚಾರ್ಯ | ೨೭-೧೦-೧೯೦೬ |
| ಚನ್ನಪ್ಪ ಉತ್ತಂಗಿ | ೨೮-೧೦-೧೮೮೧ |

### ಅಕ್ಟೋಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಡಿವಿಜಿ | ೭-೧೦-೧೯೭೫ |
| ಡಾ.ಆ.ನೆ. ಉಪಾಧ್ಯ | ೯-೧೦-೧೯೭೫ |
| ಪುತಿನ | ೧೩-೧೦-೧೯೯೮ |
| ಶ್ರೀರಂಗ | ೧೭-೧೦-೧೯೮೪ |
| ಚದುರಂಗ ಎಂ. ಸುಬ್ರಮಣ್ಯರಾಜು | ೧೯-೧೦-೧೯೯೮ |
| ತಿರುಮಲೆ ತಾತಾಚಾಯ್ಯ ಶರ್ಮಾ | ೨೦-೧೦-೧೯೭೩ |
| ಬಸವರಾಜ ಕಟ್ಟಿಮನಿ | ೨೩-೧೦-೧೯೮೯ |
| ದೇವುಡು | ೨೪-೧೦-೧೯೬೨ |
| ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳು | ೨೪-೧೦-೧೯೯೭ |
| ಪಂಜೆಮಂಗೇಶರಾವ್ | ೨೪-೧೦-೧೯೩೭ |
| ದ. ರಾ. ಬೇಂದ್ರೆ | ೨೬-೧೦-೧೯೮೧ |
| ಎಸ್.ವಿ. ಪರಮೇಶ್ವರ ಭಟ್ಟ | ೨೭-೧೦-೨೦೦೦ |
| ಆನಂದಕಂದ ಬೇಟಗೇರಿ ಕೃಷ್ಣಶರ್ಮಾ | ೩೦-೧೦-೧೯೮೨ |

## ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

ಆ ಭೂಮಿ ಈ ಭೂಮಿ
ಈ ಮನೆ ಆ ಮನೆ
ನಮ್ಮದೆನ್ನುವರು;
ನಮ್ಮದೂ ಇಲ್ಲ
ನಿಮ್ಮದೂ ಇಲ್ಲ
ನಮ್ಮ ಭೂಮಿ, ನಮ್ಮ ಮನೆ
ಮೂರಡಿ ಅಗಲ ಆರಡಿ ಉದ್ದ
ಕಾಣೋ 'ಅಲ್ಲರಖಾ' ॥೨೬॥

### ಪ್ರಕಟಣೆ

ಬಿಎಂಶ್ರೀ ಪ್ರತಿಷ್ಠಾನವು 37 ವರ್ಷಗಳಿಂದ ಸಾವಿರಾರು ಕಾರ್ಯಕ್ರಮಗಳು ಹಾಗೂ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅವಿರತವಾಗಿ ಸಕ್ರಿಯವಾಗಿರುತ್ತದೆ.ಬಿಎಂಶ್ರೀ ಪ್ರತಿಷ್ಠಾನವು ನಡೆದು ಬಂದ ದಾರಿಯನ್ನು ದಾಖಲಿಸಿ ಸಾಧನೆಗಳನ್ನು ಗುರುತಿಸಿ ಇದನ್ನು ಸಾಧ್ಯಗೊಳಿಸಿದ ಹಲವಾರು ಮಹನೀಯರ ಕೊಡುಗೆಗಳನ್ನು ಸ್ಮರಿಸಿಕೊಳ್ಳುವ ಕಾರ್ಯವನ್ನು ಕೈಗೊಳ್ಳಲು ಪ್ರತಿಷ್ಠಾನವು ಚಿಂತನೆ ನಡೆಸುತ್ತಿದೆ.ಇಂತಹ ಬೃಹತ್ ಕಾರ್ಯವನ್ನು ಸಾಧಿಸಲು ಪ್ರತಿಷ್ಠಾನದ ಜೊತೆ ಕೈಗೂಡಿಸಿ ಕೆಲಸ ಮಾಡುವಂತಹ ಸ್ವಯಂಪ್ರೇರಿತರು ಬೇಕಾಗಿರುತ್ತಾರೆ. ಈ ಮಹತ್ವದ ಕಾರ್ಯದಲ್ಲಿ ಭಾಗವಹಿಸುವಂತೆ ಎಲ್ಲ ಸದಸ್ಯರನ್ನೂ ನಮಗೆ ಬೆಂಬಲ ನೀಡಬೇಕೆಂದು ಕೋರುತ್ತವೆ. ಆಸಕ್ತರು ದಯವಿಟ್ಟು ಸಂಪರ್ಕಿಸಿ: ಗೌರವ ಕಾರ್ಯದರ್ಶಿ, ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು

# ಅಕ್ಟೋಬರ್ ೨೦೧೭ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು
## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ

### ೦೪-೧೦-೨೦೧೭ ಬುಧವಾರ ಸಂಜೆ- ೬-೦೦ ಗಂಟೆಗೆ



ಗಮಕವಾಹಿನಿ-೨೧

'ಪಂಪಭಾರತ' ಸಂಚಿಕೆ- ೮ (ಮುಂದುವರೆದ ಭಾಗ)

ವಾಚನ : ಕು॥ ರಂಜನಿ

ವ್ಯಾಖ್ಯಾನ : ಡಾ॥ ವೈ. ಎಸ್. ಗಾಯತ್ರಿ

ನೇತೃತ್ವ- ಶ್ರೀಮತಿ ಸಿ.ವಿ. ಶ್ರೀಮತಿ

### ೦೯-೧೦-೨೦೧೭ ಸೋಮವಾರ ಸಂಜೆ- ೬-೦೦ಗಂಟೆಗೆ



"ಅಕ್ಕರಗೊಟ್ಟಿ"

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ರನ್ನನ ಗದಾಯುದ್ಧ (ಒಂದು ಪದ್ಯದ ಆಶಯ)

ಚಾಲನೆ : ಶ್ರೀಮತಿ ಪಿ. ವನಜ

ರನ್ನನಗದಾಯುದ್ಧದ ಭೀಮಸೇನ ಪ್ರತಿಜ್ಞೆ ಭಾಗದಿಂದ ಆಯ್ದ ಪದ್ಯ :

ಇರಿವ ಬೆಡಂಗದೇವ ಪರಮೇಶ್ವರ ಸಾಹಸಭೀಮ ನಿನ್ನೊಳಾ<br>
ರಿರುದು ಬರ್ದುಂಕುವರ್ ನಿಜಭುಜೋಗ್ರಗದಾಪರಿಘಪ್ರಹಾರದಿಂ<br>
ಪರಿವರಿಯಾಗಿ ಪುಣ್ಮುವೆಣನಾಗಿ ಮರುಳ್ಗುಣಿಸಾಗಿ ಯುದ್ಧದೊಳ್<br>
ಕುರಿದರಿಯಾಗಿ ಬಿಳ್ದರಿಬಲಂಗಳೆ ಪೇಳವೆ ನಿನ್ನ ಬೀರಮಂ

– ತೀನಂಶ್ರೀ ಸಂಪಾದಿತ ರನ್ನನ ಗದಾಯುಧ ಪದ್ಯ ಸಂಖ್ಯೆ 19

### ೧೧-೧೦-೨೦೧೭ ಬುಧವಾರ ಸಂಜೆ ೬ : ೦೦ ಗಂಟೆಗೆ

ಹಳಗನ್ನಡ ಡಿಪ್ಲೊಮಾ ತರಗತಿಗಳ ಉದ್ಘಾಟನೆ

ಉದ್ಘಾಟನೆ- ಪ್ರೊ. ಶಿವರಾಮಯ್ಯ, ನಿವೃತ್ತ ಪ್ರಾಧ್ಯಾಪಕರು, ಹಿರಿಯ ವಿದ್ವಾಂಸರು

### ೧೬-೧೦-೨೦೧೭ ಸೋಮವಾರ ಸಂಜೆ -೬-೦೦ಗಂಟೆಗೆ



ಕನ್ನಡ ಸಂಸ್ಕೃತಿ ದರ್ಶನ

(ಸಾಕ್ಷ್ಯಚಿತ್ರ ಸದರ್ಶನ)

### ೨೯-೧೦-೨೦೧೭ ಭಾನುವಾರ ಬೆಳಿಗ್ಗೆ ೧೧-೦೦ ಗಂಟೆಗೆ

ಅಧ್ಯಕ್ಷತೆ ಮತ್ತು ಪ್ರಶಸ್ತಿ ಪ್ರದಾನ

ಡಾ.ಓ. ಎಲ್ ನಾಗಭೂಷಣ ಸ್ವಾಮಿ

ಯುವಬರಹಗಾರ ಪ್ರಶಸ್ತಿ ವಿಜೇತರು : ಶ್ರೀ ಬೇಲೂರು ರಘುನಂದನ್

ಅನುವಾದ ಪ್ರಶಸ್ತಿ ವಿಜೇತರು : ಶ್ರೀ ಬಿ.ಎಸ್. ಜಯಪ್ರಕಾಶ ನಾರಾಯಣ

### ಶಾ. ಬಾಲೂರಾವ್ ಪ್ರಶಸ್ತಿ ವಿಜೇತರು

ಪ್ರತಿವರ್ಷ ಮೊದಲ ಮುದ್ರಣವಾಗಿ ಪ್ರಕಟಗೊಂಡ ಕೃತಿಗಳಿಗಾಗಿ ಬಿ ಎಂ ಶ್ರೀ ಪ್ರತಿಷ್ಠಾನವು ಕೊಡಮಾಡುವ 'ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ'ಗೆ ಶ್ರೀ ಬೇಲೂರು ರಘುನಂದನ್ ಅವರ 'ಜೀವನ್ಮುಖಿ ತೀಸ್ತಾ' ಕೃತಿಯನ್ನೂ, 'ಶಾ. ಬಾಲೂರಾವ್ ಅನುವಾದ ಪ್ರಶಸ್ತಿ'ಗೆ ಶ್ರೀ ಜಯಪ್ರಕಾಶ ನಾರಾಯಣ ಅವರ 'ಸುಸ್ವರಲಕ್ಷ್ಮಿ ಸುಬ್ಬುಲಕ್ಷ್ಮಿ' ಅನುವಾದ ಕೃತಿಯನ್ನೂ 2016 ರಲ್ಲಿ ಮೊದಲ ಮುದ್ರಣವಾಗಿ ಪ್ರಕಟಗೊಂಡವುಗಳಲ್ಲಿ ಶ್ರೇಷ್ಠ ಕೃತಿಗಳೆಂದು ಆಯ್ಕೆ ಸಮಿತಿಯು ಆಯ್ಕೆ ಮಾಡಿದೆ. ಪ್ರತಿ ಪ್ರಶಸ್ತಿಯೂ ರೂ. 25,000/- ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುತ್ತದೆ.



# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಆಗಸ್ಟ್ 2017 – ಸೆಪ್ಟೆಂಬರ್ 2017 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

**೩೧-೮-೨೦೧೭**

**ಎಂ.ಸುಬ್ಬಯ್ಯ ಹೆಗಡೆ ಶಾಸ್ತ್ರಿ, ಯಂ.ಕೆ. ವಿಜಯಲಕ್ಷ್ಮೀ, ಎನ್. ಅನಂತರಂಗಾಚಾರ್, ಅನಂತರಂಗ ಪ್ರತಿಷ್ಠಾನ ಜಂಟಿ ದತ್ತಿ ಕಾರ್ಯಕ್ರಮ**

"ಜೈನ ಕಾವ್ಯಗಳಲ್ಲಿ ಮಾನವೀಯ ನೆಲೆಗಳು"




ಮೇಲ್ಕಂಡ ದತ್ತಿಗಳ ಆಶ್ರಯದಲ್ಲಿ, ಪ್ರತಿಷ್ಠಾನವು "ಜೈನ ಕಾವ್ಯಗಳಲ್ಲಿ ಮಾನವೀಯ ನೆಲೆಗಳು" ಎಂಬ ವಿಷಯದ ಬಗ್ಗೆ, ಡಾ॥ ರಂಗಾರೆಡ್ಡಿ ಕೋಡಿರಾಂಪುರ, ಮುಖ್ಯಸ್ಥರು, ಸ್ನಾತಕೋತ್ತರ ಕನ್ನಡ ವಿಭಾಗ ಎಂ.ಇ.ಎಸ್. ಕಾಲೇಜು, ಮಲ್ಲೇಶ್ವರಂ, ಇವರ ಉಪನ್ಯಾಸವನ್ನು ಏರ್ಪಡಿಸಿದ್ದಿತು.ಉಪನ್ಯಾಸಕರು ಪ್ರಮುಖವಾಗಿ ನಾಲ್ಕು ಜೈನ ಕವಿಗಳ ಕಾವ್ಯಗಳನ್ನು ತಮ್ಮ ವಿಷಯ ವಿಶ್ಲೇಷಣೆಗೆ ಆರಿಸಿಕೊಂಡು, ವಿಷಯವನ್ನು ಮಂಡಿಸಿದರು.ಪಂಪನ ಆದಿಪುರಾಣ, ಪಂಪಭಾರತ, ರನ್ನನ ಗದಾಯುದ್ಧ ಮತ್ತು ಯಶೋಧರ ಚರಿತೆಗಳಲ್ಲಿ ವಿವಿಧ ಪಾತ್ರಗಳಲ್ಲಿನ, ಆಗಿನ ಕಾಲದೊಡನೆ ಸರಿ ಜೋಡಿಯಾಗಿ ಸಾಗುವ ಸಾಮಾಜಿಕ ಚೌಕಟ್ಟಿನಲ್ಲಿ ಚಿತ್ರಿತವಾಗಿರುವ ಮಾನವೀಯ ಮೌಲ್ಯಗಳನ್ನು ಸಂದರ್ಭೋಚಿತವಾಗಿ ಉದಾಹರಣೆಗಳಿಂದ ನಿರೂಪಿಸಿದರು.ನಡು ನಡುವೆ ಕೆಲವು ಜಾನಪದ ಕಾವ್ಯಗಳಲ್ಲಿ ಆಂಗ್ಲ ಕವಿ ಎಸ್.ಟಿ. ಕಾಲೆಂಜ್‌ನ 'ಏನ್ಷಂಟ್ ಮ್ಯಾರಿನರ್' ಕವನದಲ್ಲಿನ ಮೌಲ್ಯಗಳನ್ನು ಗುರುತಿಸಿದರು. ಅಧ್ಯಾಪಕವರ್ಗದವರು, ಹೆಚ್ಚಿನ ಸಂಖ್ಯೆಯಲ್ಲಿ ಈ ಉಪನ್ಯಾಸದಲ್ಲಿ ಭಾಗಿಗಳಾಗಿದ್ದರೆ, ಅವರ ವಿಷಯ ಸಂಪತ್ತು ಸಮೃದ್ಧಗೊಳ್ಳುತ್ತಿದ್ದುದು ಉಪನ್ಯಾಸಕನುಗುಣ ನಿಸ್ಸಂಶಯ.ಉಪನ್ಯಾಸದ ಶೈಲಿ ಆಕರ್ಷಕವಾಗಿದ್ದುದು ವಿಶೇಷ.

ಕಾರ್ಯಕ್ರಮದ ಪ್ರಾರಂಭದಲ್ಲಿ ಡಾ॥ ಪಿ.ವಿ.ನಾರಾಯಣ, ಸಭೆಗೆ ಉಪನ್ಯಾಸಕರನ್ನು ಪರಿಚಯಿಸಿದರು. ಡಾ॥ ವಿಜಯಾ ಸುಬ್ಬರಾಜ್ ವಂದನಾರ್ಪಣೆ ಸಲ್ಲಿಸಿದರು.

**ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ**

ದಿನಾಂಕ ೧೮ನೇ ಸೆಪ್ಟೆಂಬರ್ ೨೦೧೭ರಂದುದಸರಾ ಉತ್ಸವದ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.

**೦೬-೦೯-೨೦೧೭ ಗಮಕವಾಹಿನಿ-೨೦**

**'ಪಂಪಭಾರತ' ಸಂಚಿಕೆ- ೭ (ಮುಂದುವರೆದ ಭಾಗ)**

ವಾಚನ :ಕುಮಾರಿ ನಾಗರಂಜನಿ

ವ್ಯಾಖ್ಯಾನ : ಶ್ರೀ ಶಾಂತಾಗೋಪಾಲ್

ನೇತೃತ್ವ- ಶ್ರೀಮತಿ ಸಿ.ವಿ. ಶ್ರೀಮತಿ

ಪಂಪಭಾರತ ಸಂಗ್ರಹ : ಡಾ॥ಪಿ.ವಿ.ನಾರಾಯಣ

ಪಂಪಭಾರತ ಸಂಚಿಕೆಯ ೬ನೇ ಕಾರ್ಯಕ್ರಮವು ಸುಭದ್ರಾ ಪರಿಣಯದ ಪ್ರಸಂಗವನ್ನು ನಿರೂಪಿಸುವ ಭಾಗ.ಸುಭದ್ರೆ ಮತ್ತುಅರ್ಜುನರ ಭೇಟಿ ಮತ್ತು ಪ್ರೇಮಾಂಕುರದ ಸಂದರ್ಭ.ಪರಸ್ಪರರ ನೋಟದ ಮೂಲಕ ಅನುರಾಗ ಉಂಟಾದ ವರ್ಣನೆಯನ್ನು ನಾಡೋಜ ಪಂಪನ ಕಾವ್ಯ ವಿಕ್ರಮಾರ್ಜುನ ವಿಜಯವನ್ನು ಓದಿ, ಆಸ್ವಾದಿಸಬೇಕೇ ಹೊರತು, ಇಲ್ಲಿ ಬಂದು ಬರೀ ಬಾಯಿ ಮಾತಿನಲ್ಲಿ ಹೇಳಲು ಅಸಾಧ್ಯ.ಶ್ರವ್ಯ ಕಾವ್ಯಗಳು ದೃಶ್ಯ ಕಾವ್ಯವಾಗುವ ರೀತಿಯಲ್ಲಿ ಕಂದ, ವೃತ್ತ, ವಚನ, ಮತ್ತೇಭ ಕ್ರೀಡಿತ ವೃತ್ತಗಳನ್ನು ಚಂಪು ಲಕ್ಷಣದ ಅನುಪಾನ ರೀತಿಯಲ್ಲಿ ಬಳಿಸಿ, ಕಾವ್ಯದ ರಸಾಸ್ವಾದವನ್ನು ಹೆಚ್ಚಿಸಿದ್ದಾನೆ. ಈ ಪರಿಚಯದೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು.




ಕುಮಾರಿ ನಾಗರಂಜನಿಯವರ ವಾಚನ ಮತ್ತು ಶ್ರೀಮತಿ ಶಾಂತಾಗೋಪಾಲ್ ಅವರ ವ್ಯಾಖ್ಯಾನ ಸೊಗಸಾಗಿ ಮೂಡಿಬಂದಿತು. ಕಾರ್ಯಕ್ರಮದ ಆರಂಭದಲ್ಲಿ ಡಾ॥ಪಿ.ವಿ.ನಾರಾಯಣ, ಕಲಾವಿದರನ್ನು ಸ್ವಾಗತಿಸಿ ಸಭೆಗೆ ಪರಿಚಯಿಸಿದರು.ಡಾ॥ ವಿಜಯಾ ಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯ ವಾಯಿತು.

೧೬-೦೯-೨೦೧೭

**"ಅಕ್ಕರಗೊಟ್ಟಿ"**

**ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ**

ವಿಷಯ: 'ಬನ್ನೇರುಘಟ್ಟ ಸ್ಥಳನಾಮ' – ಒಂದು ವಿಶ್ಲೇಷಣೆ.

ಚಾಲನೆ : ಡಾ॥ ಪಿ.ವಿ.ಕೃಷ್ಣ ಮೂರ್ತಿ,(ಹಿರಿಯ ಶಾಸನ ತಜ್ಞರು)

ಬೆಂಗಳೂರಿಗೆ ಸಮೀಪವಿರುವ ರಾಷ್ಟ್ರೀಯ ಉದ್ಯಾನವನ ಮತ್ತು



ಚಂಪಕಧಾಮ ಸ್ವಾಮಿಯ ದೇವಾಲಯವಿರುವ ತಾಣವೆಂಬ ಕಾರಣದಿಂದ, ಈ ಸ್ಥಳನಾಮದ ಬಗ್ಗೆ ಕುತೂಹಲವುಳ್ಳವರೆಲ್ಲರೂ ಡಾ॥ ಪಿ.ವಿ.ಕೃಷ್ಣ ಮೂರ್ತಿ ಅವರು ನಡೆಸಿಕೊಟ್ಟ ಈ ಕಾರ್ಯಕ್ರಮಕ್ಕೆ ಆಗಮಿಸಿದ್ದರು.

ಮೊದಲಿಗೆ, ಶಾಸನೋಕ್ತವಾಗಿ ಈ ಸ್ಥಳದ ಪೂರ್ವದ ಹೆಸರುಗಳ ಉಲ್ಲೇಖ, ನಂತರ ಬದಲಾದ/ ರೂಪಾಂತರಗೊಂಡ ಹೆಸರುಗಳು, ಅವುಗಳ ಕಾಲಘಟ್ಟ, ರಾಜಕೀಯ ಮತ್ತು ಆಡಳಿತ ದೃಷ್ಟಿಯಿಂದ ಈ ಸ್ಥಳದ ವ್ಯಾಪ್ತಿ, ವಿವಿಧ ರಾಜ ವಂಶದ ಆಡಳಿತಾವಧಿ, ಸುತ್ತಮುತ್ತಲಿನಲ್ಲಿ ಲೋಹದ ಕೈಗಾರಿಕೆಗಳ ಇದ್ದವೆಂದು ಸೂಚಿಸುವ ಹಳ್ಳಿಗಳ ಹೆಸರು, ಹೀಗೆ ಹಲವಾರು ವಿಷಯಗಳನ್ನು ಪರಿಚಯಿಸಿದರು. ನಂತರ ಸ್ಥಳನಾಮದ ನಿಷ್ಪತ್ತಿ, ಕಾಲಕ್ರಮೇಣದಲ್ಲಿ ರೂಪಾಂತರಗೊಂಡ ಹೆಸರುಗಳು, ಮತ್ತು ಕಾರಣಗಳನ್ನು ಸೋದಾಹರಣವಾಗಿ ವಿಶ್ಲೇಷಿಸಿದರು.ಈಗಿನ 'ಚಂಪಕಧಾಮ'ವನ್ನು ಕೆಲವು ಶಾಸನಗಳಲ್ಲಿ "ದಾಮೋದರ"ಎಂದು ಕರೆದಿರುವ ಬಗ್ಗೆ ಮಾಹಿತಿ ನೀಡಿದರು. ಹತ್ತಿರದ ಸಂಪಿಗೆಹಳ್ಳಿ ಎಂಬ ಸ್ಥಳದಿಂದ ಚಂಪಕ ಪುಷ್ಪಗಳ ಯತೇಚ್ಚ ಸರಬರಾಜನಿಂದಾಗಿ, ಚಂಪಕದಾಮ ಸ್ವಾಮಿಯೆಂಬ ಹೆಸರು ಕ್ರಿ.ಶ ೧೮೧೮ರಿಂದ ಪ್ರಚಲಿತವಾಗಿದೆ ಎಂದು ತಿಳಿಸಿದರು.

ಚರ್ಚೆ ಮತ್ತು ಸಂವಾದದ ವೇಳೆಯಲ್ಲಿ ಡಾ॥ ಕೆ.ಆರ್. ಗಣೇಶ್, ಶ್ರೀಮತಿ ನಳಿನಾ, ಶ್ರೀ ಬಿ.ಎಸ್. ಗೋಪಾಲ ಕೃಷ್ಣ, ಡಾ॥ ಪಿ.ವಿ.ನಾರಾಯಣ, ಡಾ॥ ವಿಜಯಾ ಸುಬ್ಬರಾಜ್, ಶ್ರೀ ಗುರುಪ್ರಸಾದ್, ಶ್ರೀ ವೆಂಕಟರಮಣಯ್ಯ ಮತ್ತು ಇತರರು ಭಾಗವಹಿಸಿದ್ದರು.

ಡಾ॥ ಪಿ.ವಿ.ನಾರಾಯಣ ಅವರು ಸಭೆಗೆ ಉಪನ್ಯಾಸಕರನ್ನು ಪರಿಚಯಿಸಿ ಸರ್ವರಿಗೂ ಸ್ವಾಗತಕೋರಿದರು.ಡಾ॥ ವಿಜಯಾ ಸುಬ್ಬರಾಜ್, ವಂದನಾರ್ಪಣೆ ಸಲ್ಲಿಸಿದರು.

## ಪ್ರೊ॥ ಸಿ. ಮಹದೇವಪ್ಪ – ಕಿರು ಪರಿಚಯ

ರಾಜ್ಯ ಪ್ರಶಸ್ತಿ ಪುರಸ್ಕೃತತಾದ ಪ್ರೊ॥ ಸಿ. ಮಹದೇವಪ್ಪ.ಕನ್ನಡದ ವಿದ್ವತ್ ಪರಂಪರೆಯ ಪ್ರತಿನಿಧಿಗಳು. ಟಿ. ನರಸೀಪುರದ ಹಳೆ ಸೋಸಲೆ ಗ್ರಾಮದಲ್ಲಿ ೧೯೨೨ರಲ್ಲಿ ಜನಿಸಿದ ಇವರು ೯೬ರ ಹರಯದಲ್ಲೂ ಅತ್ಯಂತ ಕ್ರಿಯಾಶೀಲರಾಗಿ, ಹಳಗನ್ನಡ ಸಾಹಿತ್ಯ, ವೀರಶೈವ ಸಾಹಿತ್ಯ, ಶಾಸ್ತ್ರ ಸಾಹಿತ್ಯ–ಕುರಿತಾಗಿ ನಿರಂತರ ಅಧ್ಯಯನ– ಸಂಶೋಧನ–ಸಂಪಾದನೆ ಇತ್ಯಾದಿ ಬೌದ್ಧಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದು, ನೂರಾರು ಲೇಖನಗಳು ಸಂಶೋಧನ ಕೃತಿಗಳು– ಸಂಪಾದಿತ ಕೃತಿಗಳು– ಇತ್ಯಾದಿಗಳನ್ನು ಕನ್ನಡ ಸಾಹಿತ್ಯ ಜಗತ್ತಿಗೆ ನೀಡಿದ್ದಾರೆ. ಕಾಲೇಜಿನ ತರಗತಿಗಳ ಭಾಷಾಂತರ ವ್ಯಾಸಂಗಕ್ಕಾಗಿ ಬರೆದ ಆಂಗ್ಲ ಭಾಷೆಯ "ಕಾಲೇಜು ಟ್ರಾನ್ಸ್ ಲೇಷನ್" ಬಗ್ಗೆ ರಾಷ್ಟ್ರಕವಿ ಕುವೆಂಪು ಪ್ರಶಂಸೆ ಮಾಡಿದ್ದಾರೆ. ಮೈಸೂರಿನಲ್ಲಿ ಪ್ರಾರಂಭವಾದ ಇವರ ವೃತ್ತಿ ಜೀವನ, ತುಮಕೂರು ಬೆಂಗಳೂರು ಮೊದಲಾಗಿ ಸರ್ಕಾರಿ ಪದವಿ ಕಾಲೇಜುಗಳಲ್ಲಿ ಮುಂದುವರೆದುದೇ ಅಲ್ಲದೆ ಅಧ್ಯಾಪಕರಾಗಿ ಪ್ರಾಂಶುಪಾಲರಾಗಿ ಜವಾಬ್ದಾರಿಗಳನ್ನು ನಿರ್ವಹಿಸಿದ್ದೇ ಅಲ್ಲದೆ ವಿಶ್ವವಿದಾಲಯಗಳ ಪರೀಕ್ಷಾ ಮಂಡಲಿಗಳಲ್ಲಿ, ಅಧ್ಯಕ್ಷರಾಗಿ ಸದಸ್ಯರಾಗಿ ಕೆಲಸಗಳನ್ನು ಸಮರ್ಥನಾಗಿ ನಿರ್ವಹಿಸಿದ್ದಾರೆ.ತೀರಾ ವ್ಯಾಪಕವಾದ. ವಿಸ್ತೃತವಾದ ಶೈಕ್ಷಣಿಕ, ಸಾಹಿತ್ಯಿಕ ಕ್ಷೇತ್ರಗಳಲ್ಲಿ ದಣಿವರಿಯದೆ ದುಡಿದ ಇವರಿಗೆ ಬಂದಿರುವ ಏಕತಾ ಸಾಹಿತ್ಯ ಪುರಸ್ಕಾರ, ರನ್ನ ಸಾಹಿತ್ಯ ಪ್ರಶಸ್ತಿ, ದೇವರಾಜ ಬಹದ್ದೂರ್ ಸಾಹಿತ್ಯಕ ಬಹುಮಾನ ಇತ್ಯಾದಿಯಾಗಿ ಹಲವಾರು ಪ್ರಶಸ್ತಿಗಳು, ಇವರ ವಿದ್ವತ್ ಸಾಧನೆಗೆ ಸಂದ ಗೌರವಕ್ಕೆ ನಿದರ್ಶನವಾಗಿದೆ. ಇವರದು ಬಹುಮುಖ ಪ್ರತಿಭೆ. ಅಧ್ಯಯನ, ಅಧ್ಯಾಪನ, ಸಂಶೋಧನ, ಸಂಪಾದನ, ಶಿಕ್ಷಣ ಆಡಳಿತ– ಇತ್ಯಾದಿಯಾಗಿ, ಹಲವು ಕ್ಷೇತ್ರಗಳಿಗೆ ತಮ್ಮ ವಿದ್ವತ್ ಪೂರ್ಣ ಕೊಡುಗೆಯನ್ನು ನೀಡಿದ್ದಾರೆ. ಎಲ್ಲಕ್ಕಿಂತ ಹೆಚ್ಚಾಗಿ, ಆ ತಮ್ಮ ನಿವಾಸದಲ್ಲಿಯೇ 'ಸಂಶೋಧನ ಕೋಟೆ' (ರಿಸರ್ಚ್ ಕಾರ್ನರ್) ಹೆಸರಿನಲ್ಲಿ ಸ್ಥಾಪಿಸಿ ಮುಂದುವರೆಸಿಕೊಂಡು ಹೋಗುತ್ತಿರುವುದು, ಸಂಶೋಧನೆಯ ಬಗ್ಗೆ ಅವರಿಗಿರುವ ಪ್ರೀತಿಯನ್ನು ಎತ್ತಿ ತೋರಿಸುತ್ತದೆ.

ಒಂದನೇ ಪುಟದಿಂದ

## ಶ್ರೀಮತಿ ಸಾವಿತ್ರಮ್ಮ–ಪ್ರೊ॥ ಎಂ.ವಿ.ಸೀತಾರಾಮಯ್ಯ ಸಾಹಿತ್ಯ ಪುರಸ್ಕಾರ

ಹೀಗೆ ಪುರಸ್ಕೃತರನ್ನು ಸಭೆಗೆ ಪರಿಚಯಮಾಡುತ್ತಾ, ಡಾ॥ ಪಿ.ವಿ.ನಾರಾಯಣ ಅವರು ಪುರಸ್ಕೃತರನ್ನೂ ಅವರ ಕುಟುಂಬ ವರ್ಗದವರನ್ನೂ ಆಯ್ಕೆ ಸಮಿತಿಯ ಸದಸ್ಯರನ್ನೂ ಮತ್ತು ನೆರೆದಿದ್ದ ವಿದ್ವಾಂಸರನ್ನೂ ಸಭೆಗೆ ಸ್ವಾಗತಕೋರಿದರು.

ಪುರಸ್ಕೃತರ ಅಭಿನಂದನಾ ಪತ್ರವನ್ನು ಡಾ॥ ವಿಜಯಾಸುಬ್ಬರಾಜ್ ಕಾರ್ಯದರ್ಶಿಗಳು ವಾಚನ ಮಾಡಿದರು.ಪುರಸ್ಕೃತರಿಗೆ ನಗದು ರೂ.೩೦,೦೦೦/– ಮತ್ತು ಫಲಕ, ಗೌರವ, ಸನ್ಮಾನಗಳ ಸಮರ್ಪಣೆ ಮಾಡಲಾಯಿತು.ಪುರಸ್ಕಾರ ಸ್ವೀಕರಿಸಿದ ಪ್ರೊ॥ ಸಿ.ಮಹದೇವಪ್ಪನವರು ತಮ್ಮ ಸಂಶೋಧನಾ ಫಲದಿಂದಾಗಿ ಬಾಣನ ಹುಟ್ಟೂರು ಆಂಧ್ರಪ್ರದೇಶ ತಾಡಪತ್ರಿಯೇ ಹೊರತು ಉತ್ತರ ಭಾರವಲ್ಲವೆಂದು ನಿರೂಪಿಸಿರುವುದನ್ನು ಸಂಕ್ಷಿಪ್ತವಾಗಿ ತಿಳಿಸಿದರು.ಕವಿ ನಾಗವರ್ಮನೇ ಆತನ ಗುರು ರಚಿಸಿರುವ ರತ್ನಮಂಜೂಷಿಕಾ ಛಂದಸ್ಸೂತ್ರ ಗ್ರಂಥಕ್ಕೂ ಭಾಷ್ಯಬರೆದಿರುವ ಸಂಶೋಧನೆಯ ವಿಷಯವನ್ನು ತಿಳಿಸಿದರು.

ಆಯ್ಕೆ ಸಮಿತಿಯ ಸದಸ್ಯರನ್ನೂ ಈ ಸಂದರ್ಭದಲ್ಲಿ ಅಭಿನಂದಿಸಲಾಯಿತು.

ಶ್ರೀ ರವೀಂದ್ರನಾಥ್ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಸಮಾಪ್ತವಾಯಿತು.

## ಹಳಗನ್ನಡ ಶಿಬಿರ ಸಮಾರೋಪ ಸಮಾರಂಭ

ಮುಗಿದ ನಂತರ, ವಿದ್ಯಾರ್ಥಿಗಳಿಗೆ ಪರೀಕ್ಷೆಯನ್ನು ಏರ್ಪಡಿಸಿ, ಮೊದಲ ಮೂರು ಉತ್ತಮ ಪತ್ರಿಕೆಗಳಿಗೆ ನಗದು ಬಹುಮಾನ ನೀಡಲಾಯಿತು.

೨) ಪ್ರತಿಷ್ಠಾನದ ಅಭಿಮಾನಿಯಾದ ಶ್ರೀ ಶಿವಶಂಕರ್, ನಿವೃತ್ತ ಇಂಜಿನಿಯರ್. ಇವರು ರೂ.೨೨,೦೦೦/– ಮೌಲ್ಯದ ನಗದು ಬಹುಮಾನಗಳನ್ನು ಈ ಹಿಂದೆಯೇ ಘೋಷಿಸಿದ್ದರು. ಬಹುಮಾನ ಪಡೆದ ವಿದ್ಯಾರ್ಥಿಗಳ ವಿವರ:

ಮೊದಲ ಸ್ಥಾನ : ೧) ಶ್ರೀಮತಿ ಲಕ್ಷ್ಮೀ ಎಸ್
೨)ಶ್ರೀಮತಿ ಚಂದ್ರಪ್ರಭಾ ಎಸ್.

ಎರಡನೇ ಸ್ಥಾನ : ೧) ಶ್ರೀ ಹರೀಶ್ ಕೆ.ಎಸ್.
೨)ಶ್ರೀಮತಿ ಲಕ್ಷ್ಮೀ ಚಂದ್ರಶೇಖರ್ .

ಮೂರನೇ ಸ್ಥಾನ : ೧) ಶ್ರೀ ಲಕ್ಷ್ಮೀನಾರಾಯಣ ಪಿ.ಎಸ್
೨)ಶ್ರೀಮತಿ ಅಂಬಿಕ ಹೆಚ್. ಕೆ.

೩) ಉತ್ತರ ಪತ್ರಿಕೆಗಳ ಮೌಲ್ಯ ಮಾಪನ : ಡಾ॥ ಕೆ.ಆರ್. ಗಣೇಶ್, ಶಿಬಿರದ ನಿರ್ದೇಶಕರು. ವಿದ್ಯಾರ್ಥಿಗಳಲ್ಲಿ ಉತ್ತಮ ಪೈಪೋಟಿಯಿದ್ದ ಕಾರಣ ಬಹುಮಾನಗಳನ್ನು ಹಂಚಬೇಕಾದ ಪರಿಸ್ಥಿತಿ ಉಂಟಾದ ಬಗ್ಗೆ ಡಾ. ಗಣೇಶ್ ಅವರು ವಿವರ ನೀಡಿದರು.

೪) ಹಿರಿಯರು, ಗೃಹಿಣಿಯರು ಹಾಗೂ ವಿದ್ಯಾರ್ಥಿಗಳು ಈ ತರಗತಿಯಲ್ಲಿ ಭಾಗವಹಿಸಿರುವುದು ತಮಗೆ ಅತ್ಯಂತ ಸಂತೋಷ ತಂದಿದೆ ಎಂದು ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿಯವರು ತಿಳಿಸಿ, ನಿಘಂಟು, ಶಬ್ದಮಣಿದರ್ಪಣದ, ಶಬ್ದಾನು ಶಾಸನದ ಉಪಯುಕ್ತತೆಯನ್ನು ತಿಳಿಸಿದರು. ಹಳಗನ್ನಡ ಅಭ್ಯಾಸಿಗಳಿಗೆ ಉತ್ತಮ ಮಾರ್ಗದರ್ಶನ ನೀಡಿದರು.

೫) ಅಧ್ಯಾಪಕರ ಅನಿಸಿಕೆಗಳು ಮತ್ತು ವಿದ್ಯಾರ್ಥಿಗಳ ಅನಿಸಿಕೆಗಳು ಬಹಳ ಸ್ವಾರಸ್ಯಕರವಾಗಿದ್ದು ಎಲ್ಲರೂ ಮೆಚ್ಚುವಂತಿದ್ದು, ಶಿಬಿರದ ಸಾರ್ಥಕತೆಯನ್ನು ನಿರೂಪಿಸುತ್ತಿತ್ತು.

ಪ್ರಾಸ್ತಾವಿಕ ನುಡಿಗಳನ್ನಾಡಿದ ಡಾ.ಪಿ.ವಿ.ನಾರಾಯಣ ಅವರು ಹಳಗನ್ನಡದ ಶ್ರೇಷ್ಠ ವಿದ್ವಾಂಸರಾದ ಡಾ.ಟಿ.ವಿ. ವೆಂಕಟಾಚಲಶಾಸ್ತ್ರೀ ಅವರನ್ನು ಸಭೆಗೆ ಪರಿಚಯಿಸಿದರು. ಶಿಬಿರದ ಯಶಸ್ಸಿಗೆ ಕಾರಣ ಕರ್ತರಾದ ಅಧ್ಯಾಪಕ ವರ್ಗದವರನ್ನು ಹಾಗೂ ಬಹುಮಾನಗಳನ್ನು ಪ್ರಾಯೋಜಿಸಿದ ಶ್ರೀ ಶಿವಶಂಕರ್ ಅವರನ್ನು ಸಭೆಗೆ ಪರಿಚಯಿಸಿ, ಎಲ್ಲರಿಗೂ ಸ್ವಾಗತ ಕೋರಿದರು.

ಡಾ. ವಿಜಯಾ ಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ಸಭೆಯು ಮುಕ್ತಾಯಗೊಂಡಿತು.




ತಲೆ: ಇದೊಂದು ದ್ರಾವಿಡ ಪದ; ಶಿರಸ್ಸು ಎಂಬ ಅರ್ಥವನ್ನು ಪಡೆದ ಈ ಶಬ್ದವು ತಮಿಳಿನಲ್ಲಿ ತಲೈ ಎಂದೂ ಮಲಯಾಳಂ ಮತ್ತು ತೆಲುಗಿನಲ್ಲಿ ತಲ ಎಂದೂ ತುಳುವಿನಲ್ಲಿ ತರೆ ಎಂದೂ ಆಗುತ್ತದೆ. ಮುಖ್ಯವಾದುದು ಎಂಬರ್ಥದಲ್ಲಿ ತಲೆ ಅನೇಕ ಸಮಾಸಪದಗಳಲ್ಲಿ ಬಳಕೆಯಲ್ಲಿದೆ; ತಲೆಬಾಗಿಲು, ತಲೆಮಣಿ ಇತ್ಯಾದಿ. ಹೆಡೆ ಎಂಬರ್ಥವೂ ಈ ಶಬ್ದಕ್ಕಿದೆ: 'ವಡ್ಡಾರಾಧನೆ'ಯಲ್ಲಿ "ಪನ್ನೆರಡು ತಲೆಯ ಪಾವುಮಂ" ಎಂಬ ಪ್ರಯೋಗವಿದೆ. ತಲೆಮಾರು ಎಂಬರ್ಥದಲ್ಲಿ ತಲೆ 'ಪಂಪಭಾರತ'ದಲ್ಲಿ ಬಂದಿದೆ ("ಸಲೆ ಸಂದಿರ್ಪತ್ತೊಂದು ತಲೆವರೆಗಂ"). ತಲೆ ಎಂದರೆ ಶ್ರೇಷ್ಠ ಎಂಬರ್ಥವೂ ಇದೆ: "ಅಂತು ಅರಿಸೇನೆಯಂ ಇದಿರ್ಚಿ ತಲೆವಿಲ್ ಎನೆ ಎಚೆದು ತವಿಸುವ ತೆಱದಿಂ" ಎಂಬುದು ಪೊನ್ನನ 'ಶಾಂತಿಪುರಾಣ'ದ ಮಾತು.

'ತಲೆಯಿಕ್ಕು' ಎಂಬ ರೂಪವು ಮಲಗು ಎಂಬರ್ಥವನ್ನು ಪಡೆಯುತ್ತದೆ ("ಅಂತದಱ ಮೊದಲೊಳ್ ಕೆಲವು ದಿವಸಂ ತಲೆಯಿಕ್ಕಿ ಪಟ್ಟಿರ್ದುದಂ" – ದುರ್ಗಸಿಂಹನ 'ಪಂಚತಂತ್ರ').ತಲೆದೋರು ಎಂಬುದು ಕಾಣಿಸಿಕೊ ಎಂಬರ್ಥವನ್ನು ಪಡೆಯುತ್ತದೆ ("ತದ್ಭೋಗಿಘ್ಣಾದ್ಯುತಿಯೆ ಕಟ್ಟಿಲೆಯಂ ತಲೆದೋಱಲೀಯದು" – 'ಪಂಪಭಾರತ'). ತಲೆಗಾಯ್ ಎಂದರೆ ರಕ್ಷಿಸು ಎಂದು: "ಧರ್ಮಮೆ ತಲೆಗಾಯ್ದುಂ" ಎಂಬುದು ರನ್ನನ 'ಅಜಿತಪುರಾಣ'ದ ಮಾತು. ರಕ್ಷಣೆಗಿರುವ ಮೈಗಾವಲ ಭಟನೇ 'ತಲೆಗಾಪಿನಾಳ್'; "ತಲೆಗಾಪಿನಾಳ್ ಉಕ್ಕಡದಾಳ ಮೇಲಿಕ್ಕಿ ಉಕ್ಕಡದಾಳ್ ಘರವಟ್ಟಿಗೆಯಾಳ ಮೇಲಿಕ್ಕಿ" (ರನ್ನನ 'ಗದಾಯುದ್ಧ').ತಲೆಗರೆ ಎಂದರೆ ತಲೆಮರೆಸಿಕೊಳ್ಳುವುದು: "ಮಂತ್ರಪದಕ್ಕೆ ಉರಗಂ ಸುಗಿವಂತೆವೊಲ್ ಅಗಿದು ಸುಗಿದು ತಲೆಗರೆದಿರ್ಪಂ" – ('ಪಂಪಭಾರತ'). ಕನ್ನಡದ ಕೆಲವು ವ್ಯಂಜನಾಕ್ಷರಗಳನ್ನು ಬರೆಯುವಾಗಿನ ಮೇಲುಗಡೆಯ ಗೆರೆಯೇ 'ತಲೆಕಟ್ಟು'."ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಟಿ ಚೆಲ್ವು" ಇವುಗಳ ಬಗ್ಗೆ ಎರಡನೆಯ ಗುಣವರ್ಮನ 'ಪುಷ್ಪದಂತಪುರಾಣ'ದಲ್ಲಿ ಹೆಮ್ಮೆಯ ವರ್ಣನೆಯಿದೆ.



ಪರಿಚಯ :

## ಪ್ರೊ.ಟಿ. ವಿ. ವೆಂಕಟಾಚಲ ಶಾಸ್ತ್ರೀ

ಪ್ರೊ.ಟಿ. ವಿ. ವೆಂಕಟಾಚಲ ಶಾಸ್ತ್ರಿಗಳು 26 ಆಗಸ್ಟ್, 1933 ರಂದು ಬೆಂಗಳೂರು ಜಿಲ್ಲೆಯಕನಕಪುರತಾಲ್ಲೂಕಿನ ಹಾರೋಹಳ್ಳಿಯಲ್ಲಿ ಜನಿಸಿದರು. ವಿದ್ಯಾರ್ಹತೆ : ಎಂ.ಎ, ಪಿಎಚ್.ಡಿ. ಶ್ರೀಯುತರು ಕನ್ನಡ ಸಾಹಿತ್ಯಕ್ಷೇತ್ರದ ಹಿರಿಯ ಸಂಶೋಧಕರು, ವಿದ್ವಾಂಸರು, ವ್ಯಾಕರಣಕಾರರು.ಅವರು ವ್ಯಾಕರಣ, ಕಾವ್ಯಮೀಮಾಂಸೆ, ಸಾಹಿತ್ಯವಿಮರ್ಶೆ, ಸಂಶೋಧನೆ, ಛಂದಸ್ಸು, ನಿಘಂಟುರಚನೆ, ಗ್ರಂಥಸಂಪಾದನೆ, ಜೀವನಚರಿತ್ರೆ, ನಾಟಕ, ಪ್ರಬಂಧ, ಭಾಷಾಂತರ ಹೀಗೆ ಸಾಹಿತ್ಯದ ನಾನಾ ಪ್ರಕಾರಗಳಲ್ಲಿ 120ಕ್ಕೂ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಿದ್ದಾರೆ

ಇವರ ಕನ್ನಡ ಛಂದಸ್ಸು, ಸಾಹಿತ್ಯ ಮಂಥನ, ಕನ್ನಡ ಛಂದಃ ಸ್ವರೂಪ, ಎಸ್.ಜಿ. ನರಸಿಂಹಾಚಾರ್ಯರ ಕವಿತೆಗಳು, ಕನ್ನಡಚಿತ್ರಕಾವ್ಯ, ಕನ್ನಡಛಂದೋವಿಹಾರ ಕೃತಿಗಳಿಗೆ ಪುಸ್ತಕ ಬಹುಮಾನಗಳು ದೊರೆತಿವೆ. ಇವರು ಹಲವು ಸಾಹಿತ್ಯ ಸಮ್ಮೇಳನಗಳ ಸಮ್ಮೇಳನಾಧ್ಯಕ್ಷರಾಗಿದ್ದರು.

ಶ್ರೀಯುತರಿಗೆ ಕನ್ನಡ ಸಾಹಿತ್ಯ ಸೇವೆಗಾಗಿ ಗೌರವ ಡಿ.ಲಿಟ್. ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾನಿಲಯ ಬೆಂಗಳೂರು, ನೃಪತುಂಗ ಸಾಹಿತ್ಯ ಪ್ರಶಸ್ತಿ, ಪ್ರೊ. ಎಸ್.ವಿ. ಪರಮೇಶ್ವರಭಟ್ಟ ಸಂಸ್ಮರಣ ಪ್ರಶಸ್ತಿ , ಪಂಪ ಪ್ರಶಸ್ತಿ , ಭಾಷಾಸಮ್ಮಾನ್ ಪ್ರಶಸ್ತಿ, ಕೇಂದ್ರ ಸಾಹಿತ್ಯಅಕಾಡೆಮಿ ಪ್ರಶಸ್ತಿ, ಕರ್ನಾಟಕ ಸಾಹಿತ್ಯಅಕಾಡೆಮಿಗೌರವ ಪ್ರಶಸ್ತಿ, ಡಾ.ಮಾಸ್ತಿ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, ಆಳ್ವಾಸ್ ನುಡಿಸಿರಿ ಪ್ರಶಸ್ತಿ , ಜಿನರಾಜಚಾವುಂಡರಾಯ ಪ್ರಶಸ್ತಿ, ಕರ್ನಾಟಕ ಸರ್ಕಾರದ ರಾಜ್ಯಪ್ರಶಸ್ತಿ ಇನ್ನೂ ಮುಂತಾದ ಪ್ರಶಸ್ತಿಗಳನ್ನು ನೀಡಿಗೌರವಿಸಲಾಗಿದೆ.

ಅವರ ಪ್ರಮುಖ ಕೃತಿಗಳು – ಮಹಾಕಾವ್ಯ ಲಕ್ಷಣ, ಶ್ರೀವತ್ಸ ನಿಘಂಟು, ಕನ್ನಡ ನೇಮಿನಾಥಪುರಾಣಗಳ ತೌಲನಿಕ ಅಧ್ಯಯನ, ಕನ್ನಡಛಂದಃಸ್ವರೂಪ, ಕನ್ನಡಛಂದಃಕೋಶ, ಕನ್ನಡಛಂದೋಮೀಮಾಂಸೆ, ಗಜಶಾಸ್ತ್ರ ಶಬ್ದಕೋಶ, ದರ್ಪಣ ವಿವರಣ, ಹಳಗನ್ನಡ ವ್ಯಾಕರಣ ಪ್ರವೇಶಿಕೆ, ಶಾಸ್ತ್ರೀಯ 11 ಸಂಪುಟಗಳು, ಅಚ್ಚಗನ್ನಡ ಪ್ರಾಣಿಪದಕೋಶ, ಉದಾರಚರಿತರು ಪ್ರಸಂಗಗಳು ಇತ್ಯಾದಿ. ಪ್ರಸ್ತುತ ಅಚ್ಚಗನ್ನಡದೇಹಾವಯವ ಪದಕೋಶ (ಅಚ್ಚಿನಲ್ಲಿದೆ)

## ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ಹಸ್ತಪ್ರತಿತರಬೇತಿ ಹಾಗೂ ಜಾಗೃತಿ –ಶಿಬಿರ 2017 ಸೆಪ್ಟಂಬರ್ 20ರಿಂದ 23

ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಹಸ್ತಪ್ರತಿ ವಿಭಾಗವು ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ ನಾಲ್ಕು ದಿನಗಳ ಹಸ್ತಪ್ರತಿತರಬೇತಿ ಹಾಗೂ ಜಾಗೃತಿ ಶಿಬಿರ–16ನ್ನು ಬೆಂಗಳೂರು ಮತ್ತು ಸುತ್ತಮುತ್ತಲಿನ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪಿಎಚ್.ಡಿ ಸಂಶೋಧನಾ, ಸ್ನಾತಕೋತ್ತರ ಮತ್ತುಅಂತಿಮ ಬಿ.ಎ. ಕನ್ನಡ (ಐಚ್ಛಿಕ) ವಿದ್ಯಾರ್ಥಿಗಳಿಗೆ ಆಯೋಜಿಸಿದ್ದು ಈ ಶಿಬಿರದಲ್ಲಿ 62 ವಿದ್ಯಾರ್ಥಿಗಳು ಭಾಗವಹಿಸಿದ್ದರು. ಶಿಬಿರದ ಉದ್ಘಾಟನೆಯನ್ನ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತಕುಲಪತಿಗಳಾದ ಪ್ರೊ|| ಮಲ್ಲೇಪು



ರಂ.ಜಿ.ವೆಂಕಟೇಶಅವರು ನೆರವೇರಿಸಿದರು. ಇಂದಿನ ಯುವ ಪೀಳಿಗೆಯ ವಿದ್ಯಾಥಿಗಳು ಹಸ್ತಪ್ರತಿಗಳಲ್ಲಿರುವ ಕರ್ನಾಟಕದ ಸಂಸ್ಕೃತಿಯನ್ನು ಬಿಂಬಿಸುವ ವಿವಿಧ ವಿಷಯಗಳನ್ನು ಅಧ್ಯಯನಕ್ಕೆಗೊಂಡುಆಧುನಿಕತಂತ್ರಜ್ಞಾನವನ್ನು ಉಪಯೋಗಿಸಿಕೊಂಡು ಹಸ್ತಪ್ರತಿಗಳಲ್ಲಿನ ಮಹತ್ತರ ವಿಷಯವನ್ನು ಮುಂದಿನ ಪೀಳಿಗೆಗೆ ತಲುಪಿಸುವ ಜವಾಬ್ದಾರಿ ಮತ್ತು ಸವಾಲನ್ನುಎದುರಿಸಬೇಕೆಂದುಕರೆ ನೀಡಿದರು. ವಿದ್ಯಾರ್ಥಿಗಳು ಮತ್ತುಉಪನ್ಯಾಸಕರ ಆಸಕ್ತಿ ಮತ್ತುಉತ್ಸಾಹಕಂಡು ಸಂತಸ ವ್ಯಕ್ತ ಪಡಿಸಿದರು.ಈ ನಿಟ್ಟಿನಲ್ಲಿಕನ್ನಡ ವಿಶ್ವವಿದ್ಯಾಲಯದಇಂತಹ ಶಿಬಿರದ ಆಯೋಜನೆಯನ್ನು ಸ್ವಾಗತಿಸಿ, ಶುಭಕೋರಿದರು.

ವಿವಿಧ ಹಸ್ತಪ್ರತಿಗಳ ಮತ್ತುಇತರ ಪರಿಕರಗಳ ಪ್ರದರ್ಶನವನ್ನು ಪ್ರತಿಷ್ಠಾನದಅಧ್ಯಕ್ಷರುಡಾ|| ಪಿ.ವಿ.ನಾರಾಯಣಅವರು ಉದ್ಘಾಟಿಸಿದರು.

ಹಂಪಿ ವಿಶ್ವವಿದ್ಯಾಲಯ, ಹಸ್ತಪ್ರತಿ ವಿಭಾಗದ ಮುಖ್ಯಸ್ಥರಾದಡಾ|| ಕೆ. ರವೀಂದ್ರನಾಥ್ಅವರು, ಕುಲಪತಿಗಳ ಅನುಪಸ್ಥಿತಿಯಲ್ಲಿ, ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿಕೊಂಡು, ತಮ್ಮ ವಿಭಾಗದ ಕಾರ್ಯಚಟುವಟಿಕೆಗಳನ್ನು ವಿವರಿಸಿದರು. ಹಸ್ತಪ್ರತಿ ವಿಭಾಗದ ನಿರ್ದೇಶಕರಾದಡಾ|| ಎಫ್.ಟಿ. ಹಳ್ಳಿಕೇರಿ ಅವರ ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಪ್ರತಿಷ್ಠಾನದ ಕಾರ್ಯದರ್ಶಿಗಳಾದ ಡಾ|| ವಿಜಯಾ ಸುಬ್ಬರಾಜ್ಅವರುಎಲ್ಲರಿಗೂ ಸ್ವಾಗತಕೋರಿದರು.

ಕಾರ್ಯಕ್ರಮದ ನಿರೂಪಣೆ ಮತ್ತು ವಂದನಾರ್ಪಣೆಯನ್ನು ಶ್ರೀ ಬಿ.ಎಸ್. ಗುರುಪ್ರಸಾದ್, ಅವರು ನೆರವೇರಿಸಿದರು.

**ದಿನಾಂಕ 11-10-2017ರಂದು ಉದ್ಘಾಟನೆಗೊಳ್ಳುತ್ತಿರುವ ಆರು ತಿಂಗಳ ಹಳಗನ್ನಡದ ಡಿಪ್ಲಮೊ ಪಠ್ಯ ಕ್ರಮವನ್ನು ಈ ಕೆಳಗೆ ನೀಡಲಾಗಿದೆ.**

## ಹಳಗನ್ನಡ – ಡಿಪ್ಲೊಮ

### ಪಠ್ಯಕ್ರಮ

(ಪಠ್ಯಕ್ರಮವನ್ನು ರೂಪಿಸುವಾಗ 'ಶಾಸ್ತ್ರೀಯ ಕನ್ನಡದ ಅತ್ಯುನ್ನತ ಅಧ್ಯಯನ ಕೇಂದ್ರ'ವು ನಿರ್ಣಯಿಸಿದಂತೆ ಆರಂಭದಿಂದ ಕ್ರಿಸ್ತಶಕ 1750 ರವರೆಗಿನಕನ್ನಡ ಸಾಹಿತ್ಯವನ್ನು ಗಮನದಲ್ಲಿರಿಸಿಕೊಳ್ಳಲಾಗಿದೆ)

ಅ)ಮೊದಲ ಪತ್ರಿಕೆ : ಒಂದು ಕಾವ್ಯದ ವಿವರವಾದ ಅಧ್ಯಯನ

1) ಚಂಪೂ ಪ್ರಕಾರದ ಸ್ಥೂಲ ಪರಿಚಯ

2) ಪಂಪ ಕವಿಯ 'ಸಂಕ್ಷಿಪ್ತ ಆದಿಪುರಾಣ'

ಆ)ಎರಡನೆಯ ಪತ್ರಿಕೆ: ಆಯ್ದ ಪದ್ಯ ಹಾಗೂ ಗದ್ಯ ಭಾಗಗಳ ಅಧ್ಯಯನ :

1) 'ಕವಿರಾಜಮಾರ್ಗ'ದ ಆಯ್ದ ಭಾಗಗಳು : ಕನ್ನಡ ನಾಡು ನಾಡವರು ಹಾಗೂ ನುಡಿಗಳಿಗೆ ಸಂಬಂಧಿಸಿದ ಪದ್ಯಗಳು

2) ರನ್ನನ 'ಗದಾಯುದ್ಧ'ದ ಭಾಗ: 'ದುರ್ಯೋಧನ ವಿಲಾಪ'

3) 'ವಡ್ಡಾರಾಧನೆ' ಯ 'ವಿದ್ಯುಚ್ಚೋರನ ಕತೆ'

4) ನಯಸೇನನ 'ಧರ್ಮಾಮೃತ'ದ ಒಂದು ಕತೆ : 'ದಯಾಮಿತ್ರಸೆಟ್ಟಿಯ ಕತೆ'

5) ನಾಗಚಂದ್ರನ 'ಪಂಪರಾಮಾಯಣ'ದಿಂದ 'ಸೀತಾಪಹರಣ ಪ್ರಸಂಗ'

6) ಹರಿಹರನ 'ಗಿರಿಜಾಕಲ್ಯಾಣ'ದ ಒಂದು ಭಾಗ : 'ಮುಸಿ ದಿಟಕ್ಕೆ ನಿಲ್ವುದೆ ಜಗದೊಳ್'

7) ರಾಘವಾಂಕನ 'ಹರಿಶ್ಚಂದ್ರಕಾವ್ಯ ಸಂಗ್ರಹ'ದ 'ವಿಶ್ವಾಮಿತ್ರಾಶ್ರಮಪ್ರವೇಶ' ಎಂಬ ಭಾಗ

8) ಕುಮಾರವ್ಯಾಸ ಭಾರತದ 'ಉದ್ಯೋಗಪರ್ವ'ದ ಒಂಬತ್ತನೆಯ ಸಂಧಿ- ಕೃಷ್ಣದೌತ್ಯ ಪ್ರಸಂಗ

9) ಕನಕದಾಸನ 'ನಳಚರಿತ್ರೆ'ಯ ಮೂರನೆಯ ಸಂಧಿಯ ಆಯ್ದ ಸುಮಾರು ಐವತ್ತು ಪದ್ಯಗಳು

10) ಷಡಕ್ಷರದೇವನ 'ಶಬರಶಂಕರವಿಳಾಸ'ದ 'ಕಿರಾತಾರ್ಜುನ ಸಂವಾದ' ಮತ್ತು 'ಶಬರನಲ್ಲಿ

ಶಿವದರ್ಶನ' ಭಾಗಗಳು (ರಂ.ಶ್ರೀ./ಮುಗಳಿಯವರ 'ಕನ್ನಡಕಾವ್ಯ ಸಂಚಯ'ದ ಆಯ್ದ ಭಾಗಗಳು)

ಇ) ಮೂರನೆಯ ಪತ್ರಿಕೆ : ಶಾಸ್ತ್ರೀಯ ಕನ್ನಡದ ಅಧ್ಯಯನಕ್ಕೆ ಪೂರಕ ಶಾಸ್ತ್ರ ವಿಷಯಗಳು:

1) ಹಳಗನ್ನಡ ವ್ಯಾಕರಣ:

ವರ್ಣಮಾಲೆ, ಸಂಧಿ; ಲಿಂಗ, ವಚನ ಮತ್ತು ವಿಭಕ್ತಿ; ಧಾತು, ಕಾಲ ಮತ್ತು ಆಖ್ಯಾತ ಪ್ರತ್ಯಯಗಳು; ಸಮಾಸಗಳು ಮತ್ತು ಅವ್ಯಯಗಳಿಗೆ ಸಂಬಂಧಿಸಿದ ಕೇಶಿರಾಜನ ಮುಖ್ಯ ಸೂತ್ರಗಳ ಆಶಯ

2) ಛಂದಸ್ಸಿನ ಸ್ಥೂಲ ಪರಿಚಯ :

ಅ. ಅಕ್ಷರ ಛಂದಸ್ಸಿನ ಸ್ವರೂಪ : ಖ್ಯಾತ ಕರ್ಣಾಟಕಗಳು; ಕೆಲವು ವಿರಳ ವೃತ್ತಗಳು;

ಆ. ಮಾತ್ರಾ ಛಂದಸ್ಸಿನ ಸ್ವರೂಪ : ಕಂದಪದ್ಯ, ಚಂಪೂ ಕಾವ್ಯದ ರಗಳೆಗಳು; ಮೂರು ರಗಳೆಗಳು

ಇ. ಅಂಶ ಛಂದಸ್ಸಿನ ಸ್ವರೂಪ : ಅಂಶಷಟ್ಪದಿ, ಪಿರಿಯಕ್ಕರ, ತ್ರಿಪದಿ.

3) ಅಲಂಕಾರಶಾಸ್ತ್ರದ ಮುಖ್ಯ ತತ್ವಗಳು:

ಅ. ಕಾವ್ಯಸ್ವರೂಪ

ಆ. ಅಲಂಕಾರಗಳು; ಕೆಲವು ಮುಖ್ಯ ಅಲಂಕಾರಗಳು.

ಇ. ರೀತಿ

ಈ. ಧ್ವನಿ

ಉ. ಔಚಿತ್ಯ

ಊ. ವಕ್ರೋಕ್ತಿ

ಋ. ರಸಸಿದ್ಧಾಂತ

4) ಶಾಸನಶಾಸ್ತ್ರ :

ಅ. ಶಾಸನಗಳ ಸಾಮಾನ್ಯ ಸ್ವರೂಪ

ಆ. ಶಾಸನ ಪ್ರಕಾರಗಳು

ಇ. ಕನ್ನಡ ಲಿಪಿ ವಿಕಾಸದ ಸ್ಥೂಲ ಪರಿಚಯ

ಈ. ಶಾಸನ ಪಠ್ಯಗಳು: ಹಲ್ಮಿಡಿ ಶಾಸನ, ಕಪ್ಪೆ ಅರಭಟ್ಟನ ಶಾಸನ, ದೇಕಬ್ಬೆಯ ಶಾಸನ, ಬುಕ್ಕರಾಯನ ಶಾಸನ.

ಈ) ನಾಲ್ಕನೆಯ ಪತ್ರಿಕೆ : ತೌಲನಿಕ ಅಧ್ಯಯನ

1. ತೌಲನಿಕ ದ್ರಾವಿಡ ಭಾಷಾ ಅಧ್ಯಯನ:

ಅ. ದ್ರಾವಿಡ  ಭಾಷಾ ಕುಟುಂಬಗಳು- ದ್ರಾವಿಡ ಭಾಷಾಕುಟುಂಬ

ಆ. ದ್ರಾವಿಡ ಭಾಷೆಗಳಲ್ಲಿ ಧ್ವನಿವ್ಯವಸ್ಥೆ

ಇ. ನಾಮಪದಗಳು-ಸರ್ವನಾಮಗಳು-ವಿಭಕ್ತಿಗಳು-ವಿಭಕ್ತಿ ಪ್ರತ್ಯಯಗಳು

ಈ. ವಚನ ಮತ್ತು ಲಿಂಗ ವ್ಯವಸ್ಥೆ

ಉ. ಸಂಖ್ಯಾವಾಚಕಗಳು

2. .ಪ್ರಾಚೀನ ಜ್ಞಾನಸಾಮಗ್ರಿಯ ಪರಿಚಯ :

ಅ. ಪ್ರಾಚೀನ ಕಾಲದ ಬರವಣಿಗೆಯ ಸಾಮಗ್ರಿಗಳು

ಆ. ಓಲೆಗರಿಗಳ ಸ್ವರೂಪ

ಇ. ಪ್ರಾಚೀನ ಕಾಲದ ಬರಹಗಾರರು – ಲಿಪಿಕಾರ, ಕಲ್ಲುಕುಟಿಗ ಇತ್ಯಾದಿ

ಈ. ಲಿಪಿಕಾರ ಸ್ಖಾಲಿತ್ಯಗಳು

ಉ. ಗ್ರಂಥ ಸಂಪಾದನೆಯ ಸ್ವರೂಪ – ಪಾಠ ನಿಷ್ಕರ್ಷೆ

3) ಕನ್ನಡ ಸಾಹಿತ್ಯದ ಸ್ಥೂಲ ಚರಿತ್ರೆ; ಪ್ರೇರಣೆಗಳು, ಪ್ರಭಾವಗಳು ಮತ್ತು ಪ್ರವೃತ್ತಿಗಳು:

ಕನ್ನಡ ಸಾಹಿತ್ಯದ ಪ್ರಾಚೀನತೆ, ಗದ್ಯ, ಚಂಪೂ, ರಗಳೆ, ವಚನ, ಷಟ್ಪದಿ, ಸಾಂಗತ್ಯ ಮತ್ತು ತ್ರಿಪದಿಗಳ ಮುಖ್ಯ ಕವಿಗಳು ಹಾಗೂ ಅವು ಆಶಯ ಮತ್ತು ಆಕೃತಿಗಳ ವಿಷಯದಲ್ಲಿ ಕನ್ನಡ

ಸಾಹಿತ್ಯಕ್ಕೆ ನೀಡಿದ ಹೊಸ ಸ್ವರೂಪಗಳ ಪರಿಚಯ – ಹಿನ್ನೆಲೆಯೊಂದಿಗೆ

4) ಕನ್ನಡದ ಮೇಲೆ ಸಂಸ್ಕೃತ-ಪ್ರಾಕೃತಗಳ ಪ್ರಭಾವ:

ಅ. ಭಾಷೆ , ಆ. ಸಾಹಿತ್ಯ , ಇ. ಛಂದಸ್ಸು

******

ಶಾಸ್ತ್ರೀಯ ಕನ್ನಡ ಡಿಪ್ಲೊಮ

ಪ್ರಶ್ನೆ ಪತ್ರಿಕೆಗಳ ಸ್ವರೂಪ

ಮೊದಲ ಪ್ರತಿಕೆ

1 ಅ) ವೃತ್ತವೊಂದರ ಪದವಿಭಾಗ, ಅನ್ವಯ ಮತ್ತು ತಾತ್ಪರ್ಯ

ಆ) ಕಂದ, ತ್ರಿಪದಿ, ಅಕ್ಕರ, ರಗಳೆಗಳಲ್ಲಿ ಒಂದರ ಪದವಿಭಾಗ, ಅನ್ವಯ- ತಾತ್ಪರ್ಯ

2. ಅಭಿವ್ಯಕ್ತಿ ವಿಶೇಷಗಳು

3. ಪಠ್ಯವನ್ನಾಧರಿಸಿದ ನಾಲ್ಕು ಪ್ರಶ್ನೆಗಳಿಗೆ ನೂರು ಪದಗಳನ್ನು ಮೀರದ ಪ್ರಬಂಧರೂಪದ ಉತ್ತರಗಳು

ಎರಡನೆ ಪತ್ರಿಕೆ

1. ಅ) ವೃತ್ತವೊಂದರ ಪದವಿಭಾಗ, ಅನ್ವಯ ಮತ್ತು ತಾತ್ಪರ್ಯ

ಆ) ಗದ್ಯಭಾಗವೊಂದರ ಹೊಸಗನ್ನಡ ತಾತ್ಪರ್ಯ

2. ನಾಲ್ಕು ವಾಕ್ಯಗಳ ಸಂದರ್ಭಸೂಚಕ ಭಾವ ವಿವರಣೆ

3. ಪಠ್ಯವನ್ನಾಧರಿಸಿದ ನಾಲ್ಕು ಪ್ರಶ್ನೆಗಳಿಗೆ ನೂರು ಪದಗಳನ್ನು ಮೀರದ ಪ್ರಬಂಧರೂಪದ ಉತ್ತರಗಳು

ಮೂರನೆಯ ಪತ್ರಿಕೆ

1. ವ್ಯಾಕರಣಕ್ಕೆ ಸಂಬಂಧಿಸಿದ ಪ್ರಶ್ನೆಗಳು

2. ಛಂದಸ್ಸಿಗೆ ಸಂಬಂಧಿಸಿದ ಪ್ರಶ್ನೆಗಳು

3. ಅಲಂಕಾರಶಾಸ್ತ್ರಕ್ಕೆ ಸಂಬಂಧಿಸಿದ ಪ್ರಶ್ನೆಗಳು

4. ಶಾಸನಶಾಸ್ತ್ರಕ್ಕೆ ಸಂಬಂಧಿಸಿದ ಪ್ರಶ್ನೆಗಳು

ನಾಲ್ಕನೆಯ ಪತ್ರಿಕೆ :

1. ದ್ರಾವಿಡಭಾಷಾ ವ್ಯಾಕರಣಗಳ ಅಧ್ಯಯನಕ್ಕೆ ಸಂಬಂಧಿಸಿದ ಪ್ರಶ್ನೆಗಳು

2. ಪ್ರಾಚೀನ ಜ್ಞಾನ ಸಾಮಗ್ರಿಯ ಪರಿಚಯಕ್ಕೆ ಸಂಬಂಧಿಸಿದ ಪ್ರಶ್ನೆಗಳು

3. ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ಪ್ರಶ್ನೆಗಳು

4. ಕನ್ನಡದ ಮೇಲೆ ಸಂಸ್ಕೃತ-ಪ್ರಾಕೃತಗಳ ಪ್ರಭಾವಕ್ಕೆ ಸಂಬಂಧಿಸಿದ ಪ್ರಶ್ನೆಗಳು

## ಬಿ.ಎಸ್. ಜಯಪ್ರಕಾಶ ನಾರಾಯಣ



ಚನ್ನರಾಯಪಟ್ಟಣದವರಾದ ಬಿ.ಎಸ್. ಜಯಪ್ರಕಾಶ್ ನಾರಾಯಣ ಅವರು ಬೆಂಗಳೂರಿನಲ್ಲಿ ಪತ್ರಕರ್ತರಾಗಿರುತ್ತಾರೆ. ಇದುವರೆಗೆ ಪ್ರಕಟವಾಗಿರುವ ಇವರ ಕೃತಿಗಳೆಂದರೆ–ನಾನು ಮಲಾಲಾ, ಕದಡಿದ ಕಣಿವೆ; ಕಾಶ್ಮೀರಿ ಪಂಡಿತರ ನೋವು ನರಳಾಟ, ಸೊಗಸುಗಾರನ ಏಳುಬೀಳು–ವಿಜಯ್ ಮಲ್ಯ ವೃತ್ತಾಂತ, ಸಾಫ್ಟ್‌ವೇರನಿಂದ, ಸಾಕ್ಷಾತ್ಕಾರದ ಕಡೆಗೆ–ಸನ್ಯಾಸಿಯೊಬ್ಬನ ಆತ್ಮವೃಂತ್ತಾಂತ( ಎಲ್ಲವೂ ಅನುವಾದಗಳು), ಜೀವ ಜೀವದ ನಂಟು(ಅನಾಮಿಕರ ವ್ಯಕ್ತಿ ಚಿತ್ರಗಳು), ಹೃದಯದ ಸಹಜ ತರಂಗ (ಆಯ್ದು ಲೇಖನಗಳು), ನನ್ನ ಬದುಕು, ನನ್ನ ಫೋಟೋಗ್ರಫಿ (ವಿಖ್ಯಾತ ಛಾಯಾಗ್ರಾಹಕ ಕೆ.ಜಿ ಸೋಮಶೇಖರ್ ಅವರ ಆತ್ಮಕಥನಾತ್ಮಕ ನೆನಪುಗಳ ನಿರೂಪಣೆ) ನನ್ನ ಸಾಹಿತ್ಯದ ಐದು ದಶಕಗಳು(ಯುಆರ್ ಅನಂತಮೂರ್ತಿ ಅವರ ಸಂವತ್ಸರ ಉಪನ್ಯಾಸದ ಅನುವಾದ) ಮುಂತಾದವು. ಇವರ 'ನಾನು ಮಲಾಲಾ' ಕೃತಿಯು ಕುವೆಂಪು ಭಾಷಾ ಭಾರತಿ ಪ್ರಾಧಿಕಾರದಿಂದ 2014ನೇ ಸಾಲಿನ ಅನುವಾದ ಪ್ರಶಸ್ತಿಗೆ ಪಾತ್ರವಾಗಿದೆ.

## ಬೇಲೂರು ರಘುನಂದನ್



ಹಾಸನ ಜಿಲ್ಲೆಯ ಬೇಲೂರಿನವರಾದ ಇವರು ಮೈಸೂರು ವಿಶ್ವವಿದ್ಯಾಲಯದಿಂದ ಮೂರು ಚಿನ್ನದ ಪದಕಗಳೊಂದಿಗೆ ಕನ್ನಡದಲ್ಲಿ ಎಂ.ಎ.ಪದವಿ ಪಡೆದಿದ್ದಾರೆ. ಎಂ.ಫಿಲ್ ಪದವಿಯನ್ನು ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿಯಲ್ಲಿ ಪಡೆದು ಪ್ರಸ್ತುತ ಅದೇ ವಿಶ್ವ ವಿದ್ಯಾಲಯದಲ್ಲಿ ಪಿಎಚ್.ಡಿ ಸಂಶೋಧನೆಯಲ್ಲಿ ತೊಡಗಿದ್ದಾರೆ. ಕಾಜಾಣ–ಎಂಬ ಸಂಸ್ಥೆಯಮೂಲಕ ಅನೇಕ ಯುವ ಬರಹಗಾರರ ಮತ್ತು ಕಲಾವಿದರ ಜೊತೆ–ಯಾಗುತ್ತಿದ್ದಾರೆ.

ಇವರು ರಾಜ್ಯ ಗಮಕ ಕಲಾ ಪರಿಷತ್ತು ನಡೆಸುವ ಪಾರೀಣ (ಸೀನಿಯರ್) ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿದ್ದಾರೆ.

ಸದ್ಯ ಬೆಂಗಳೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಜಯನಗರದಲ್ಲಿ ಕನ್ನಡ ಸಹಾಯಕ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. 2017 ರಲ್ಲಿ ಕರ್ನಾಟಕ ಸರ್ಕಾರ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯನನ್ನಾಗಿ ನಾಮ ನಿರ್ದೇಶನ ಮಾಡಿದೆ.ಇವರಿಗೆ ಹಲವಾರು ಪ್ರಶಸ್ತಿ ಗೌರವಗಳು ಸಂದಿವೆ. ಇವರ ನಾಲ್ಕು ಕಾವ್ಯ, ಎರಡು ಮಕ್ಕಳ ಕಥಾ ಸಾಹಿತ್ಯ, ನಾಲ್ಕು ಕಟ್ಟು ಪದಗಳು, ಒಂದು ಪ್ರವಾಸ ಸಾಹಿತ್ಯ, ಒಂದು ಅಂಕಣ ಬರಹ, ಮೂರು ನಾಟಕ,ಇತರ ಕಥೆಗಳು, ಮೂರು ಅಡಕ ಮುದ್ರಿಕೆಗಳು ಹಾಗೂ ಲೇಖನಗಳು ಪ್ರಕಟಗೊಂಡಿವೆ

ಇವರು ಬರೆದಿರುವ ರಂಗಿ ಕಥೆಯನ್ನು ಆಧರಿಸಿ ಕಿರು ಚಿತ್ರ ಮಣಿಪುರಿ ಅಂತರರಾಷ್ಟ್ರೀಯ ಸಿನಿಮೋತ್ಸವದಲ್ಲಿ ಮನ್ನಣೆ ಪಡೆದಿದೆ ಮತ್ತು ಮೈಸೂರಿನ ರಂಗಾಯಣ ನಡೆಸಿದ ಕಿರು ಚಿತ್ರೋತ್ಸವದಲ್ಲಿ ಬಹುಮಾನ ಪಡೆದಿದೆ.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-09-2017**

## ೨೦೧೭ ಸೆಪ್ಟೆಂಬರ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾ ಕಾರ್ಯವು ನಡೆಯುತ್ತಿದೆ. ೨೦೧೭ರ ಸೆಪ್ಟಂಬರ್ ತಿಂಗಳಿನಲ್ಲಿ ೪ ಗ್ರಂಥಗಳ ಶುಷ್ಕ ಶುದ್ದೀಕರಣ, ೩ ಮಸಿ+ತೈಲ, ೫ ಗ್ರಂಥ ಪತ್ರಗಳ ಮರುಜೋಡಣೆ ಕಾರ್‍ಯ, ೧೨ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್‍ಯ ೨ ಗ್ರಂಥಗಳಿಗೆ ಬಟ್ಟೆ ಸುತ್ತುವ ಕಾರ್‍ಯ , ಮತ್ತು ೮ ಗ್ರಂಥಗಳಿಗೆ ಸೂಚಿಯನ್ನು ಮಾಡಲಾಗಿದೆ.

## ಶಾ. ಬಾಲೂರಾವ್ ಪ್ರಶಸ್ತಿ



ಶ್ರೀಮತಿ ಕಮಲಿನಿ ಬಾಲೂರಾವ್ ಅವರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ಎರಡು ಪ್ರಶಸ್ತಿಗಳು 'ಶಾ ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ' ಮತ್ತು 'ಶಾ ಬಾಲೂರಾವ್ ಅನುವಾದ ಪ್ರಶಸ್ತಿ' . ದಿವಂಗತ ಶ್ರೀ ಶಾ. ಬಾಲೂರಾವ್ ಅವರು ಪ್ರಖ್ಯಾತ ಸಾಹಿತಿಗಳಾಗಿದ್ದವರು. ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳೆರಡರಲ್ಲಿಯೂ ಮೌಲಿಕವಾದ ಬರವಣಿಗೆಯನ್ನು ಮಾಡಿದವರು. ಸ್ವತಂತ್ರವಾಗಿ ಕಥೆಗಳನ್ನೂ ಬರೆದದ್ದಲ್ಲದೆ ಅನುವಾದವನ್ನೂ ಮಾಡಿದವರು. ಬಂಗಾಳಿ ಮತ್ತು ರಷ್ಯನ್ ಭಾಷೆಗಳಿಂದ ನೇರವಾಗಿ ಕಥೆಗಳನ್ನು, ಕವಿತೆಗಳನ್ನು ಅನುವಾದ ಮಾಡಿರುವುದು ಶಾ. ಬಾಲೂರಾವ್ ಅವರ ಹೆಗ್ಗಳಿಕೆ. ಈ ಎರಡೂ ಪ್ರಶಸ್ತಿಗಳು ಅವರಿಗೆ ಪ್ರಿಯವಾಗಿದ್ದ ಸಾಹಿತ್ಯ ಕೃಷಿಗೆ ಅವರ ನೆನಪಿನಲ್ಲಿ ಶ್ರೀಮತಿ ಕಮಲಿನಿಯವರು ಸ್ಥಾಪಿಸಿರುವಂತಹವು.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ.......................................................................................

.......................................................................................

.......................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭